


ತಾಯಿ ಭಾರತಿಗೆ ಕನ್ನಡದಾರತಿ
ಕನ್ನಡಮ್ಮನಿಗೆ ಕಲಬುರ್ಗಿ ಕಂಪು...

# ಯಾದಗಿರಿಯ ಶ್ರೀ ರಾಚೋಟಿ ವೀರಣ್ಣ ದೇವಸ್ಥಾನ




# ವಿಕಾಸ ಭಾರತಿ

## ತಾಯಿ ಭಾರತಿಗೆ ಕನ್ನಡದಾರತಿ
## ಕನ್ನಡಮ್ಮನಿಗೆ ಕಲಬುರ್ಗಿ ಕಂಪು

ಇತಿಹಾಸ ನಿರ್ಮಿಸಲು ಇತಿಹಾಸ ತಿಳಿದಿರಬೇಕು ಎಂಬ ಮಾತಿದೆ. ಪುಣ್ಯಕ್ಷೇತ್ರಗಳ, ಪ್ರಕೃತ್ತಿ ವಿಸ್ಮಯ ತಾಣಗಳ ಪರಿಚಯದಿಂದ, ಪ್ರದೇಶದ ಸಾಂಸ್ಕೃತಿಕ, ಜನರ ಅಂತ:ಸತ್ವಗಳ ಅರಿವು ತೆರೆದುಕೊಳ್ಳುತ್ತದೆ. ಸ್ವಾಭಿಮಾನ ಅರಳುತ್ತದೆ. ಸನಾತನ ವಾರಸುದಾರಿಕೆ ಮುಂದುವರೆಸಿ, ಪುರಾತನರು ಉಳಿಸಿ-ಬೆಳೆಸಿ ನಮಗೆ ನೀಡಿದ ಆಸ್ತಿಗೆ ಮತ್ತಷ್ಟು ಸೇರಿಸಿ, ಭವಿಷ್ಯತ್ತಿಗೆ ಅರ್ಪಿಸಬೇಕೆಂಬ ಜವಾಬ್ದಾರಿ ನೆನಪಾಗುತ್ತದೆ.

ರಾಷ್ಟ್ರಕೂಟ-ಚಾಲುಕ್ಯರಾದಿಯಾಗಿ ಆಳಿದ, ಭೀಮೆ-ಕೃಷ್ಣೆಯರು ಹರಿದ, ಶರಣರು ಸಾಧು-ಸಂತರರ ಪಾವನ ನೆಲದಲ್ಲಿರುವ ಪುಣ್ಯಕ್ಷೇತ್ರಗಳ, ಪ್ರಕೃತಿದತ್ತ ಸುಂದರ ತಾಣಗಳ ಪರಿಚಯ ಕನ್ನಡನಾಡಿಗೆ ಮತ್ತು ದೇಶಕ್ಕೆ ಪರಿಚಯಿಸುವ ಸದುದ್ದೇಶದ ಪುಟ್ಟ ಪ್ರಯತ್ನವಿದು. ಹೊಸದಾಗಿ ರೂಪುಗೊಂಡ ಭೀಮಾ ನದಿ ತೀರದ ಪುಟ್ಟ ಪ್ರಭಾವಿ ಜಿಲ್ಲೆ ಯಾದಗಿರಿ ಜಿಲ್ಲೆ.

ದೇವಾಲಯಗಳಿಗೆ ಭೇಟಿ ನೀಡುವುದರಿಂದ ಮನಸ್ಸಿಗೆ ಶಾಂತಿ ಸಮಾಧಾನಗಳು ಸಿಗುತ್ತವೆ. ಶಾಂತ ಸ್ವರೂಪಿ ಮತ್ತು ಮಾತೃಹೃದಯದ ಶ್ರೀ ರಾಚೋಟಿ ವೀರಣ್ಣ, ಶ್ರೀ ಕಾಳಿಕಾ ಮಾತೆ ದರ್ಶನಕ್ಕಾಗಿ ಶ್ರದ್ಧಾ ಭಕ್ತಿಯಿಂದ ದೇವಾಲಯಕ್ಕೆ ತಾವು ಆಗಮಿಸಬೇಕೆಂಬ ಬಯಕೆಯಿಂದ ನಾವು ಜಿಲ್ಲೆಯ ಅಧಿದೇವತೆ ಶ್ರೀ ರಾಚೋಟಿ ವೀರಣ್ಣ ದೇವಾಲಯವನ್ನು ಮಾತ್ರ ವೈಶಿಷ್ಟ್ಯವಾಗಿ ಪರಿಚಯಿಸುತ್ತಿದ್ದೇವೆ. ಗುಹೆಯಲ್ಲಿ ನೆಲೆನಿಂತ ಭಕ್ತಿ ಭದ್ರತೆ ಶಕ್ತಿಗಳ ಸಮನ್ವಯದ ಸಂದೇಶ ನೀಡುವ ಶ್ರೀ ರಾಚೋಟಿ ವೀರಣ್ಣ ಮತ್ತು ಶ್ರೀ ಕಾಳಿಕಾ ಮಾತೆಯ ದಿವ್ಯದರ್ಶನ ಪಡೆದು ಇಹಪರಗಳಲ್ಲಿ ಸುಖ ಪಡೆವ ಮಹಾದಾಸೆ ಮನದಲ್ಲಿ ಚಿಗುರುವಂತಾದರೆ ಪ್ರಯತ್ನ ಸಾರ್ಥಕವಾಯಿತು ಎಂಬ ಭಾವನೆ ನಮ್ಮದು. ನಮ್ಮ ಕಲಬುರ್ಗಿ ಜಿಲ್ಲೆಯ ಪೌರಾಣಿಕ ಕ್ಷೇತ್ರಗಳ ಪ್ರವಾಸಕ್ಕೆ ಪ್ರಚಾರ ನೀಡಲು, ತನ್ಮೂಲಕ ಪ್ರವಾಸೋದ್ಯಮ ಒಂದು ಉದ್ಯಮವಾಗಿ ಬೆಳೆಯಬೇಕೆಂಬ ಹೆಬ್ಬಯಕೆಯಿಂದ ಚೊಚ್ಚಲ ಚಿತ್ರಪುಸ್ತಿಕೆ ತಮ್ಮ ಹಸ್ತಕ್ಕೆ ತಲುಪಿಸುತ್ತಿದ್ದೇವೆ. ನೆಲದ ಋಣ ತೀರಿಸುವ ಪ್ರಯತ್ನಕ್ಕೆ ನಾಡಿನ, ಅದರಲ್ಲೂ ಜಿಲ್ಲೆಯ ಪ್ರಜ್ಞಾವಂತ ಜನರು ಸಹಾಯಹಸ್ತ ಚಾಚಿ ಸಹಕರಿಸಬೇಕು ಎಂಬುದು ನಮ್ಮ ವಿನಂತಿ. ಬನ್ನಿ! ನಾಡ ಕಟ್ಟಲು ನಾಡಿನ ಅಂತ:ಸತ್ವ ಅರಿವ ಕೆಲಸಕ್ಕೆ ನಾವೂ ನೀವೂ ಒಂದಾಗಿ ಕೈಜೋಡಿಸುವಾ!.....



ದೇವಸ್ಥಾನದ ಪ್ರವೇಶ ದ್ವಾರದಿಂದ ಕಣ್ನೋಟ




ನೂರೊಂದು ಮೆಟ್ಟಿಲುಗಳ ನಂತರ ಪ್ರವೇಶದ್ವಾರ



ಬಾವಿ, ಪಕ್ಕದಲ್ಲಿ ಈಶ್ವರ ದೇವಸ್ಥಾನ

## ಶ್ರೀ ವೀರಭದ್ರ ಅವತಾರ

ಮರಳುತನದಲ್ಲಿ ದಕ್ಷಬ್ರಹ್ಮನು ಶಿವನನ್ನು ಆಮಂತ್ರಿಸದೇ ಯಜ್ಞ ಮಾಡಲು ಮುಂದಾದನು. ತವರು ಮನೆಯಲ್ಲಿ ತಂದೆ ಮಾಡುವ ಯಜ್ಞಕ್ಕೆ ಆಮಂತ್ರಣದ ಹಂಗೇಕೆಂದು ಯಜ್ಞದಲ್ಲಿ ಪಾಲ್ಗೊಳ್ಳಲು ಶಿವಸತಿ ತಾ ಬಂದಳು. ತಂದೆಯಾಡಿದ ಶಿವನಿಂದೆ ಸಹಿಸದೇ ತನ್ನ ಅಂತ:ಶಕ್ತಿಯ ತೇಜದಲ್ಲಿ ಲೀನವಾದಳು. ಕೋಟಿ ಸೂರ್ಯ ಪ್ರಕಾಶದಿಂದ ಮೆರೆವ ಶ್ರೀ ವೀರಭದ್ರನು, ಶಿವನ ಜಡೆ ಯಿಂದ ಅವತರಿಸಿ, ಶಿವನಾಣತಿಯಂತೆ ದಕ್ಷಬ್ರಹ್ಮನ ಯಜ್ಞ ಭಸ್ಮ ಮಾಡಿ ದುಷ್ಟ ದಕ್ಷನ ಶಿರಕಡಿದು ಶಿವದ್ರೋಹಿಗಳನು ಶಿಕ್ಷಿಸಿದನು. ಯಜುರ್‌ವೇದದಲ್ಲಿ; ಶಿವದ್ರೋಹಿಗಳ ಶಿರಚ್ಛೇದಿಸಿದ (ನಮ: ಶೂರಾಯ ಚಾವ ಬೀಂದತೇಚ) ವೀರಭದ್ರನಿಗೆ ಪ್ರಣಾಮ ಗಳೆಂಬ ಮಾತುಗಳಿವೆ. ದಕ್ಷಸತಿಯರು ಪಾಹಿಮಾಂ ಎಂದು ಪ್ರಾರ್ಥಿಸಲು, ಕುರಿ ಶಿರವಿಟ್ಟು ದಕ್ಷನಿಗೆ ಮರುಜೀವ ನೀಡಿ, ಪ್ರಾರ್ಥಿಸಿದವರಿಗೆ ಜೀವದಾನ ಮಾಡಿದ ಶ್ರೀ ವೀರಭದ್ರ ಶಿವಭಕ್ತಿ ಪಸರಿಸಲು ರಾಚವಟಿಯಲ್ಲಿ ನೆಲೆಸಿ, ರಾಚೋಟಿ ವೀರಣ್ಣನೆಂದೂ ಹೆಸರಾದನು. ವೀರತ್ವ ಮತ್ತು ಭದ್ರತೆ ಉಂಟಾಗುವುದು ಎಂಬ ಸಂದೇಶ ವೀರಭದ್ರನ ಅವತಾರ ದಲ್ಲಿದೆ. ಮಂಗಳ ಗ್ರಹವನ್ನು ವೀರಭದ್ರನ ರೂಪದಲ್ಲಿ ಆರಾಧಿಸಲಾಗುತ್ತದೆ. ಋಗ್ವೇದದಲ್ಲಿ ವೀರಭದ್ರನನ್ನು ಇಳೆಬಾನುಗಳನ್ನು ತುಂಬಿದಂಥ ವಿರಾಟ ಸ್ಥಂಭರೂಪಿ ಅವನು (ಸವೀರೋ ದಕ್ಷಸಾದನೋ ವಿಯಸ್ಥಂಭ ರೋದಸೀ) ಎಂದು ವರ್ಣಿಸಲಾಗಿದೆ. ರಾಚೋಟಿ ವೀರಭದ್ರನ ಪ್ರತಾಪವೆಂತೆಂದೊಡೆ; ಪಾತಾಳದಿಂದ ಕೆಳಗೆ ಪಾದ, ಸುರಲೋಕ ದಿಂದ ಮೇಲೆ ಉತ್ತಮಾಂಗ, ಬ್ರಹ್ಮಾಂಡವೇ ಮುಕುಟ, ಗಗನವೇ ಮುಖ, ದಶದಿಕ್ಕುಗಳೇ ಬಾಹುಗಳು, ಪೃಥ್ವಿಯೇ ಸಿಂಹಾಸನ.....; ಇಂಥ ಚೈತನ್ಯ ಜಂಗಮಕ್ಕೆ ನಾನು ನಮೋ ನಮೋ.. ಎನುತಿರ್ದೆನಯ್ಯ ಸೌರಾಷ್ಟ್ರೇ ಸೋಮೇಶ್ವರಾ ಕಡೆ ಕಡೆ.. ಎಂದು ವಡಬುಗಳಲ್ಲಿ ಶ್ರೀ ವೀರಭದ್ರನ ಗುಣಗಾನ ಮಾಡಲಾಗಿದೆ. ವೀರಭದ್ರನಿಗೆ ವೀರಣ್ಣ, ಚನ್ನವೀರ, ಶರಭಯ್ಯ, ರುದ್ರದೇವರು, ಚನ್ನಮಲ್ಲ, ಬನದಯ್ಯ, ಮುಂತಾದ ಹೆಸರುಗಳಿವೆ.

ವೀರತ್ವ, ಶಾಂತತೆ ಮತ್ತು ಭಕ್ತಿ-ಶಕ್ತಿಗಳ ನೆಲೆಗೊಳಿಸಲು, ಶಿವದ್ರೋಹಿಗಳಿಗೆ ಶಿಕ್ಷೆ, ಶಿವಭಕ್ತರಿಗೆ ರಕ್ಷೆ ನೀಡಲು, ಮರ್ತ್ಯಲೋಕ ಮಾನವರನ್ನು ಉದ್ದರಿಸಲು, ಶ್ರೀ ರಾಚೋಟಿವೀರಣ್ಣ ಯಾದಗಿರಿ ಯಲ್ಲಿ ನೆಲೆಸಿದ್ದಾನೆ. ಶ್ರೀ ವೀರಭದ್ರರ ಪುಣ್ಯಕ್ಷೇತ್ರಗಳಾದ ಕಡಪ ಜಿಲ್ಲೆಯ ರಾಚೋಟಿ, ಕಾಳೆಬೆಳಗುಂದಿಯ ಬನದೇಶ್ವರ, ಕಲಬುರ್ಗಿಯ ಮಕ್ತಂಪುರ, ಪಟ್ಟಣ ಗ್ರಾಮದ ಹಾಗೂ ವಾಗ್ದರಗಿಯ ರಾಚಣ್ಣ... ಮುಂತಾದ ಕ್ಷೇತ್ರಗಳಲ್ಲಿ ಶ್ರೀ ವೀರಭದ್ರನು ರಾಚೋಟಿ ವೀರಣ್ಣನಾಗಿ ನೆಲೆಸಿದ್ದಾನೆ ಎಂಬುದು ಸಂಶೋಧನಾ ವಿಷಯವಾಗಿದೆ. ಶ್ರೀ ವೀರಭದ್ರ, ಶ್ರೀ ರಾಚೋಟಿ ವೀರಣ್ಣನಾಗಿ ನೆಲಸಿದ ತಾಣಗಳಲ್ಲಿ ಯಾದಗಿರಿಯ ಶ್ರೀ ರಾಚೋಟಿ ವೀರಣ್ಣ ಸುಕ್ಷೇತ್ರವು ಮಹತ್ವದ ತಾಣವಾಗಿದೆ. ■

ಭೂಮಿಯ ಮೇಲಿನ ಸ್ವರ್ಗದ ತುಣುಕು – ಭೂ ಕೈಲಾಸ

## ಯಾದಗಿರಿ ಸುಕ್ಷೇತ್ರ ಶ್ರೀ ರಾಚೋಟಿ ವೀರಣ್ಣ ದೇವಸ್ಥಾನ

ಯಾದಗಿರಿ–ವಾಡಿ ರಸ್ತೆಯ (5ನೇ ಕಿ.ಮಿ) ಪಕ್ಕದಲ್ಲಿನ ವಿಶಾಲ ಕರಿಕಲ್ಲಿನ ಬೆಟ್ಟದಗುಂಟ ಸಾಗಿದರೆ ವಿಭೂತಿ ಧಾರಣೆ ಮಾಡಿದಂತೆ ಬೆಟ್ಟದಲ್ಲಿ ಸುಂದರ ದೇವಾಲಯ ಕಾಣಿಸುತ್ತದೆ. ಬೆಟ್ಟದ ಕೆಳಭಾಗದ ಬಯಲಲ್ಲಿ ದೊಡ್ಡ ಚಿಕ್ಕ ಬಾವಿಗಳಿವೆ. ಬಾವಿಯ ನೀರಿನಿಂದ ಶುಭ್ರಗೊಂಡು ಈಶ್ವರ ದೇವಸ್ಥಾನದಲ್ಲಿರುವ ಶಿವಲಿಂಗ ದರ್ಶನ ಮಾಡಿಕೊಂಡು ಮೆಟ್ಟಲೇರುತ್ತಿದ್ದಂತೆ ಬಾಯಿಯಿಂದ ಶಿವನಾಮ ತಾನಾಗಿ ಬರುತ್ತದೆ. ಅಲ್ಪ ವಿಚಾರಗಳಳಿದು ದೇವ ದರುಶನಕ್ಕೆ ಮನ ಪರಿಪಕ್ವವಾಗುವುದರ ಅನುಭವವಾಗುತ್ತದೆ.

ಸೌಂದರ್ಯವಿದ್ದಲ್ಲಿ ಶಿವನಿದ್ದಾನೆ, ಶಿವನಿದ್ದಲ್ಲಿ ಸತ್ಯವಿರುತ್ತದೆ ಎಂಬುದಕ್ಕೆ ಸಾಕ್ಷಿಯಾಗಿ ಪ್ರಕೃತಿಯ ಮಡಿಲಲ್ಲಿ ಭೂಮಿಯಿಂದ ಎತ್ತರದ ಬೆಟ್ಟದ ಗವಿಯಲ್ಲಿ ಯಾದಗಿರಿಯ ಶ್ರೀ ರಾಚೋಟಿವೀರಣ್ಣ ನೆಲೆಯಾಗಿದ್ದಾನೆ. ಉಗ್ರರೂಪಿ ಶ್ರೀ ವೀರಭದ್ರ ಇಲ್ಲಿ ಕಾಳಿಕಾ ಮಾತೆ ಜೊತೆ ಶಾಂತಮೂರ್ತಿಯಾಗಿ, ಭಕ್ತರ ಉದ್ಧಾರಕ್ಕಾಗಿ ನೆಲೆಸಿದ್ದಾನೆ. ಸಂಸಾರದ ನೂರೆಂಟು ತಾಪತ್ರಯ ಕಳೆದುಕೊಳ್ಳಲು ನೂರೆಂಟು ಮೆಟ್ಟಲುಗಳ ಬೆಟ್ಟ ಶಿವನಾಮ ಸ್ಮರಿಸುತ್ತ ಹತ್ತಲು ಆರಂಭಿಸಿದರೆ ಬೆಟ್ಟದ ಬಂಡೆಗಳಿಂದ ಬೀಸುವ ಗಾಳಿಯೂ ಸಹ ಶಿವನಾಮ ಉಸುರುವಂತೆ ಭಾಸವಾಗುತ್ತದೆ. ಇಡೀ ವಾತಾವರಣ ಶಿವಮಯ. ಮಹಾದ್ವಾರದ ಮತ್ತು ಗರ್ಭಗುಡಿಯ ಮುಂದಿನ ಬಯಲ ಪ್ರದೇಶದಲ್ಲಿ ನಿಂತು ಕಣ್ಣಾಯಿಸಿದರೆ ಬೆಟ್ಟಗಳ ಸಾಲು, ಚಿತ್ತಾರ ಬಿಡಿಸಿದಂತೆ ಯಾದಗಿರಿ ನಗರ ಕಾಣಿಸುತ್ತದೆ. ಬೆಟ್ಟದ ತುತ್ತ ತುದಿಯಲ್ಲಿ ಶಿಖರದ ಹತ್ತಿರ ನಿಂತು ನೋಡಿದರೆ ನಿಸರ್ಗ ಬಿಡಿಸಿದ ರಂಗೋಲಿ ಕಾಣಿಸುತ್ತದೆ. ಲೌಕಿಕ ಮರೆಸುವಂತಹ ಅಲೌಕಿಕ ದೇವಾಲಯದ ತಾಣದಲ್ಲಿ, ಒಂದೇ ಬೃಹತ ಬಂಡೆಗಲ್ಲಿನಲ್ಲಿ ಮೂಡಿದ ಗವಿಯ ಒಳಗೆ ಶ್ರೀ ರಾಚೋಟಿ ವೀರಣ್ಣ ಮತ್ತು ಶ್ರೀ ಕಾಳಿಕಾ ಮಾತೆಯ ಗರ್ಭಗುಡಿಗಳಿವೆ. ಗರ್ಭಗುಡಿಗೆ ಸ್ವಾಭಾವಿಕ ಗಾಳಿ ಬೆಳಕು ಬರುವಂತಹ ವ್ಯವಸ್ಥೆ ಇದೆ. ದೇವ ದರುಶನಕ್ಕಾಗಿ ಬರುವ ಭಕ್ತರನ್ನು ಸ್ವಾಗತಿಸಲು ಎಂಬಂತೆ ಗರ್ಭಗುಡಿ ಎದುರಿನ ಮಂಟಪದಲ್ಲಿ ಶಿವಗಣಾಧೀಶ್ವರನಾದ ನಂದಿ ಕುಳಿತಿದ್ದಾನೆ.

ಗರ್ಭಗುಡಿ ಹಿಂಬಾಗಿಲ ಹತ್ತಿರ ಧ್ಯಾನ, ಪೂಜೆಗಾಗಿ ಪ್ರಶಾಂತ ಜಾಗ. ಭಜನೆ ಮತ್ತು ಶುಭ ಕಾರ್ಯಗಳನ್ನು ಮಾಡಲು ಗರ್ಭಗುಡಿ ಮುಂದೆ ಹಜಾರ, ಹಜಾರಕ್ಕೆ ತಾಗಿ ವಿಶ್ರಾಂತಿ ತಾಣ. ಇವೆಲ್ಲ ಒಂದು ಬಂಡೆಕಲ್ಲಿನ ಅಡಿಯಲ್ಲಿ. ದೇವ ದರ್ಶನದ ನಂತರ ವಿಶ್ರಮಿಸುತ್ತಾ ಆಕಾಶ ಭೂಮಿಯ ವಿಶಾಲತೆ ಅನುಭವಿಸಲು ಮುಂದೆ ಬಯಲು ಜಾಗವಿದೆ. ಗುಡಿಯ ಆವರಣದಲ್ಲಿ ನಡೆವ ಕಾರ್ಯಕ್ರಮ ನೋಡಲು ಅಟ್ಟಣಗೆ. ಭಕ್ತಿಯಿಂದ ಬಂದ ಭಕ್ತರಿಗೆಲ್ಲ ದರುಶನದ ಸೌಭಾಗ್ಯ! ಅಡಿಗೆ ಮತ್ತು ದಾಸೋಹ ಪ್ರಸಾದ ಸೇವೆಗಾಗಿ ಮಂಟಪ ಇತ್ಯಾದಿ ಅನುಕೂಲಗಳಿವೆ. ಈ ಎಲ್ಲ ಅನುಕೂಲಗಳು ನೆಲದಿಂದ ಸುಮಾರು 200 ಅಡಿಗಿಂತ ಹೆಚ್ಚು ಎತ್ತರದ ನೂರೆಂಟು ಮೆಟ್ಟಿಲು ಹತ್ತಿದ ಮೇಲೆ ಇರುವ ದೇವಸ್ಥಾನದಲ್ಲಿ ಎಂಬುದೇ ಅದ್ಭುತ! ವೈಶಿಷ್ಟ್ಯಮಯ!

ಬೆಟ್ಟದಲ್ಲಿ ಅಪರೂಪದ ಔಷಧಿ ಸಸ್ಯಗಳು, ಉತ್ತಮ ಗುಣಮಟ್ಟದ ಗ್ರಾನೈಟ್ ಕಲ್ಲು ಲಭ್ಯ ಇವೆ.

## ಭಕ್ತಿ-ಶಕ್ತಿಗಳ ಪ್ರತೀಕ ಶ್ರೀ ರಾಚೋಟಿ ವೀರಣ್ಣ

ಶ್ರೀ ವೀರಭದ್ರನು ಎಲ್ಲ ಕಡೆ ಶಸ್ತ್ರ ಸಜ್ಜಿತನಾಗಿ ರುದ್ರನಾಗಿ ಇರುವುದರಿಂದ ಅಲ್ಲಿ ಎಲ್ಲ ಕಡೆ ಶಸ್ತ್ರಗಳ ಪ್ರದರ್ಶನ, ಅಗ್ಗಿ ತುಳಿವುದು ಮುಂತಾದವುಗಳಿಂದ ರೌದ್ರತೆ ಎದ್ದು ಕಾಣುತ್ತದೆ. ಯಾದಗಿರಿಯ ರಾಚವಟಿಯ ಸುಕ್ಷೇತ್ರದಲ್ಲಿ ನೆಲೆನಿಂತ ಶ್ರೀ ರಾಚೋಟಿವೀರಣ್ಣ ಶಾಂತರೂಪಿಯಾಗಿ, ಸಮೃದ್ಧಿಪ್ರದಾಯಕನಾಗಿ ನೆಲೆಸಿದ್ದಾನೆ. ಹರಗುರು-ಗುರುಹರನಾಗಿ, ಶಿವನ ಪ್ರತಿರೂಪದ ಅವತಾರದಲ್ಲಿದ್ದಾನೆ.

ಭಕ್ತರು ಶ್ರೀ ರಾಚೋಟಿವೀರಣ್ಣನನ್ನು ಸ್ತುತಿಸುತ್ತ ಶಿವನ ದರುಶನ ಸುಲಭವಾಗಿ ತಮ್ಮದಾಗಿಸಿ ಕೊಳ್ಳಲು ಸಡಗರದಿಂದ ಬರುತ್ತಾರೆ. ಕೇವಲ ತಮಗಾಗಿಯೇ ಹಂಬಲಿಸಿ ಬರುವವರಿಗಾಗಿ ನಿಂತಿರುವರಂತೆ ಭಕ್ತಿ-ಶಕ್ತಿಗಳ ಪ್ರತೀಕವಾಗಿ, ಸದ್ದುಗದ್ದಲಗಳಿಂದ ದೂರವಾಗಿ, ಆರಾಧಕರ ಒಲವಿನ ದೈವವಾಗಿ, ಭಕ್ತರ ಕಲ್ಪವೃಕ್ಷ ಕಾಮಧೇನುವಾಗಿ ಶ್ರೀ ರಾಚೋಟಿ ವೀರಣ್ಣ ಮತ್ತು ಶ್ರೀ ಕಾಳಿಕಾ ಮಾತೆ ಶತಶತಮಾನಗಳಿಂದ ಆರಾಧಿಸಲ್ಪಡುತ್ತಿದ್ದಾರೆ. ವೀರತ್ವದ ಪ್ರಕಟೀಕರಣ ಭದ್ರತೆಗೆ ಬುನಾದಿ ಆಗುತ್ತದೆ. ವೀರನಾದವನು ಸದಾ ಶಾಂತನಾಗಿರಬೇಕು ಎಂಬ ಸಂದೇಶ ನೀಡುವ ರೀತಿಯಲ್ಲಿ ಮಹಿಮೆ ಕೇಳಿ ಹಾತೊರೆದು ಬರುವ ಭಕ್ತರ ಯೋಗಕ್ಷೇಮ ಕಾಯಲು ಸದಾಶಿವನ ರೂಪದಲ್ಲಿ ಶ್ರೀ ರಾಚೋಟಿ ವೀರಣ್ಣ ಇದ್ದಾನೆ. ಭಕ್ತಿಯಿಂದ ಬರುವ ಶಕ್ತಿ ಶಿವನೊಲುಮೆಯ ಸಾಧನವಾಗುತ್ತದೆ ಎಂಬ ಮಾತಿಗೆ ಸಾಕ್ಷಿಯಾದ ಸುಕ್ಷೇತ್ರವಿದು.

ನೂರೆಂಟು ತಾಪತ್ರಯ ಕಳೆದುಕೊಳ್ಳಲು ನೂರೆಂಟು ಮೆಟ್ಟಲು ಹತ್ತಬೇಕು ಮನೆ ಚಿಂತೆ ಬಿಟ್ಟು ಮನವನ್ನು ದೇವರಿಗೆ ಅರ್ಪಿಸಬೇಕು ಎಂಬುದರ ಸಂಕೇತ ಈ ದೇವಸ್ಥಾನ. ಹಿಮಗಿರಿ ದೆತ್ತರವ ನೆನಪಿಸುವ ಕರಿಕಲ್ಲಿನ ಬೆಟ್ಟ ಯಾದಗಿರಿ ರಾಚವಟಿಯ ಬೆಟ್ಟ. ಪ್ರಕೃತಿ ನೀಡಿದ ವರವಾಗಿ ಬಂದ ಸುಕ್ಷೇತ್ರ, ಶಿವಭಕ್ತರ ಇಷ್ಟಾರ್ಥಗಳನ್ನು ಪೂರೈಸುವ ದೇವ ನೆಲೆಸಿದ ಜಾಗೃತ ಕೇಂದ್ರ, ಮಾತೆ ತಾನಾಗಿ ಮಗುವಿನ ಬೇಕು ಬೇಡಗಳನ್ನು ಗಮನಿಸುವಂತೆ, ಹರನಾಗಿ, ಗುರುವಾಗಿ, ಜಗದ ಜನರ ಪರಿಪಾಲಕನಾಗಿ, ಕಾಪಾಡುವ ಶ್ರೀ ರಾಚೋಟಿವೀರಣ್ಣ ನೆಲೆಸಿದ ಸುಕ್ಷೇತ್ರದ ದರ್ಶನ ಮಾಡಿ ಸೌಭಾಗ್ಯವಂತರಾಗೋಣ.

ಮತ್ತು

ದಿ. 29.03.2010 ರಂದು
ನ್ಯಾ. ಡಾ. ಮ. ರಾಮಾಜೋಯಿಸ
ರಾಜ್ಯ ಸಭೆಯ ಸದಸ್ಯರು
ವಿಶ್ರಾಂತ ಮುಖ್ಯ ನ್ಯಾಯಾಧೀಶರು
ಮತ್ತು ವಿಶ್ರಾಂತ ರಾಜ್ಯಪಾಲರು
ಅವರ ಅನುದಾನದಲ್ಲಿ ನಿರ್ಮಿಸಿದ
ದೇವಸ್ಥಾನದ ರಸ್ತೆಯು ಲೋಕಾರ್ಪಣೆ
ಜಿಲ್ಲೆಯ ಚುನಾಯಿತ ಪ್ರತಿನಿಧಿಗಳ,
ಅಧಿಕಾರಿಗಳ ಉಪಸ್ಥಿತಿಯಲ್ಲಿ ನಡೆಯಿತು.
ಭಕ್ತರು ಕೃತಜ್ಞತೆಯಿಂದ ನೆನೆಯುತ್ತಾರೆ.

## ನಾಲ್ಕನೇ ಶ್ರಾವಣ ಸೋಮವಾರ ಶ್ರೀ ರಾಚೋಟಿ ವೀರಣ್ಣ ಜಾತ್ರೆ

ಅರಿವಿನ ಬೆಳಕಿನಲಿ ಗುರು ಕಾಣಲು, ಜಗದ ಜಂಗಮ ನಾದ, ಗುರುವಿನ ಗುರು ಪರಮಗುರುವಾದ, ಮಂಗಲವನ್ನು ಹರಸುವ ಶ್ರೀ ರಾಚೋಟಿ ವೀರಣ್ಣನ ದರುಶನಕ್ಕಾಗಿ ಜಾತ್ರೆಯಲ್ಲಿ ಭಾಗವಹಿಸೋಣ. ಶ್ರಾವಣದ ಸೋಮವಾರಗಳು ಬಲು ಪವಿತ್ರ. ನಾಲ್ಕನೇಯ ಶ್ರಾವಣ ಸೋಮವಾರ ಮತ್ತೂ ಚೆನ್ನ. ಅಂದು ನಡೆವ ಯಾದಗಿರಿ ಶ್ರೀ ರಾಚೋಟಿವೀರಣ್ಣ ಜಾತ್ರೆಯು ವೈಶಿಷ್ಟ್ಯ ಮಯ. ಜಾತ್ರೆಯ ದಿನ ಕರ್ನಾಟಕ, ಮಹಾರಾಷ್ಟ್ರ, ಆಂದ್ರಪ್ರದೇಶ ರಾಜ್ಯಗಳಿಂದ ಬಿಡಿ ಬಿಡಿಯಾಗಿ, ಗುಂಪಾಗಿ ಸುಕ್ಷೇತ್ರದಲ್ಲಿ ಭಕ್ತರ ಸಮೂಹ ನೆರೆಯುವುದನ್ನು ನೋಡಲು ನಯನ ಮನೋಹರ. ಕಿರಿ–ಹಿರಿಯರೆನ್ನದೇ ಎಲ್ಲರ ಬಾಯಲ್ಲಿ ಶಿವನಾಮ ಸ್ಮರಣೆ. ಅಭಿಷೇಕ, ಪಲ್ಲಕ್ಕಿ ಉತ್ಸವ, ಭಕ್ತಿ ಸಂಗೀತ, ಭಜನೆ ಅನ್ನ ದಾಸೋಹ ಮತ್ತು ವಿಶೇಷ ಅಲಂಕಾರಗಳು ಕಾಣಸಿಗುತ್ತವೆ. ಇಹದ ಸಿರಿಗಿಂತ ಪರದ ಪಾರಮಾರ್ಥ ನೀಡು, ಸದಾ ಭಕ್ತಿಯ ಬೇಡುತ್ತೇವೆ ಎಂದು ಬರುವ ಭಕ್ತರ ಇಷ್ಟಾರ್ಥ ಸಿದ್ಧಿಸುತ್ತವೆ.

ಶ್ರೀ ರಾಚೋಟಿ ವೀರಣ್ಣನ ಭವ್ಯ ದಿವ್ಯ ದೇವಾಲಯಕ್ಕೆ ಭೇಟಿ ನೀಡಿದಾಗ ಮಾತ್ರ ಮನದಲ್ಲಿ ಮನೆ ಮಾಡಿದ ಅರಿವಿನಂತೆ ಗುಹೆಯಲ್ಲಿ ನೆಲೆಸಿದ ಶಾಂತಮೂರ್ತಿ ಶ್ರೀ ರಾಚೋಟಿವೀರಣ್ಣ ಮತ್ತು ಶ್ರೀ ಮಹಾಕಾಳಿಯ ದರ್ಶನವಾಗುವುದು.



ಗಂಗಾಸ್ಥಳ



ಪುರವಂತರಿಂದ ಸೇವೆ

## ದಾಸೋಹ

ವೀರಶೈವ ಸಂಸ್ಕೃತಿಯಲ್ಲಿ ದಾಸೋಹ ಮತ್ತು ಪ್ರಸಾದಗಳೆಂಬ ಜೀವನಾದರ್ಶಗಳಿವೆ. ಸ್ವಾವಲಂಬಿಯಾಗಲು ಉದ್ಯೋಗ, ಗಳಿಸಿದ್ದರಲ್ಲಿ ಸಮಪಾಲು ಸಮಾಜಕ್ಕೆ ಎಂಬುದು ದಾಸೋಹ ಆಗುತ್ತದೆ. ಉದ್ಯೋಗ ಮತ್ತು ದಾಸೋಹಗಳ ಸಮ್ಮಿಲನ ಕಾಯಕವಾಗುತ್ತದೆ. ಅನ್ನ ದೇವರಲ್ಲದೇ ಅನ್ಯ ದೇವರಿಲ್ಲ ಎಂಬ ಜಾನಪದರ ನುಡಿಯಿದೆ.

ನಗರ ಮತ್ತು ಗ್ರಾಮಗಳಿಂದ ದೇವಾಲಯಕ್ಕೆ ಬರುವ ಭಕ್ತರಿಗೆ ಪ್ರಸಾದ ವ್ಯವಸ್ಥೆ ಇದೆ. ಜಾತ್ರೆಗೆ ನಿರಂತರವಾಗಿ ಬರುವ ಭಕ್ತರ ಸೇವೆ ಮಾಡಲು ಕೆಲ ಭಕ್ತರು ತಮ್ಮ ಮನೆಯಿಂದ ಪ್ರಸಾದ ಮಾಡಿಕೊಂಡು ತಂದು ಹಂಚುತ್ತಾರೆ. ಕೆಲ ಭಕ್ತರು ಗುಡಿಯ ಬಯಲು ಪ್ರದೇಶದಲ್ಲಿ ಪ್ರಸಾದ ಸಿದ್ಧಪಡಿಸಿ ಹಂಚುತ್ತಾರೆ. ಪ್ರಸಾದ ವ್ಯವಸ್ಥೆಗಾಗಿ ಭಕ್ತರು ತಮ್ಮ ಆದಾಯದ ಪಾಲನ್ನು ತೆಗೆದಿರಿಸಿ ದಾಸೋಹ ನಡೆಸುತ್ತಾರೆ. ಹಸಿವೆಯಾದವರಿಗೆ ಅನ್ನ ಬಡಿಸುವುದು ಮಹಾದಾನ. ಅನ್ನವೇ ದೇವರು ಎನ್ನುವ ಮಾತಿನ ಪಾಲನೆ ಇಲ್ಲಿ ಸಹಜವಾಗಿ ಆಗುತ್ತದೆ. ಜಾತಿ, ಮತ, ಪಂಥ ಪಂಗಡ, ಭಾಷೆಗಳ ಭೇದವಿಲ್ಲದೆ ಎಲ್ಲ ಜನ ಪ್ರಸಾದವನ್ನು ಭಕ್ತಿಯಿಂದ ಸ್ವೀಕರಿಸುತ್ತಾರೆ.

ಅನ್ನ ದಾಸೋಹದ ಜೊತೆ ಜೊತೆಯಾಗಿ ಭಜನೆ, ಭಕ್ತಿಸಂಗೀತದ ದಾಸೋಹ ನಡೆಸಲು ಸ್ವ ಇಚ್ಛೆಯಿಂದ ಭಕ್ತರು ಬರುತ್ತಾರೆ. ಪ್ರತಿ ಭಕ್ತರು ಮಾಡುವ ದಾಸೋಹವು ಇಲ್ಲಿ





# ಸಹಭೋಜನ







## ರಸ್ತೆ ಮಾಹಿತಿ



ಚೆನ್ನೈ–ಮುಂಬೈ
ಬೆಂಗಳೂರು–ಮುಂಬೈ ಮಾರ್ಗದ
ರೈಲುಗಳು ಯಾದಗಿರಿಯಲ್ಲಿ ನಿಲ್ಲುತ್ತವೆ.






ರಾಜ್ಯ ಮತ್ತು ಅಂತರರಾಜ್ಯಗಳ
ಬಸ್ಸುಗಳಿಂದ
ಯಾದಗಿರಿಯನ್ನು ತಲುಪಬಹುದು

ತಾಯಿ ಭಾರತಿಗೆ ಕನ್ನಡದಾರತಿ
ಕನ್ನಡಮ್ಮನಿಗೆ ಕಲಬುರ್ಗಿ ಕಂಪು...

ಸಂಪರ್ಕ: vikasabharatiglb@gmail.com

ಮುದ್ರಣ : ಶ್ರೀ ಬಂಧು ಪ್ರಿಂಟರ್ಸ್, ಗುಲಬರ್ಗಾ. - 2630